**ಸಂಧ್ಯೋಪಾಸನ ಮಾತ್ರೇಣ ಕಲ್ಮಷಾತ್ ಪೂತತಾಂ ವ್ರಜೇತ್ ।**

ಸಂಧ್ಯಾವಂದನೆ ಮಾಡಿದ ಮಾತ್ರದಿಂದ ಪಾಪಗಳು ಪರಿಹೃತವಾಗಿ ಮನುಷ್ಯನು ಪವಿತ್ರನಾಗುತ್ತಾನೆ. ಗೋಹತ್ಯಾ ಮಾಡಿದವನನ್ನೂ, ಕುಷ್ಠಿಯನ್ನೂ, ಮಹಾಪಾತಕಿ ಯನ್ನೂ, ಉಪಪಾತಕಿಯನ್ನೂ ನೋಡಿ, ಮುಟ್ಟಿ, ಮೈಲಿಗೆಯಾದವರು ಸೂರ್ಯನನ್ನು ನೋಡಿದರೆ ಶುದ್ಧರಾಗುತ್ತಾರೆ. ಸೂರ್ಯೋಪಾಸನೆಯಿಂದ ಎಲ್ಲ ರೋಗಗಳೂ ಹೋಗುತ್ತವೆ. ಕಡುದಾರಿದ್ರ್ಯ, ಕುರುಡುತನ ದೂರಾಗುತ್ತವೆ. ದುಃಖ ನಾಶವಾಗುತ್ತದೆ. ಹರಿಹರಾದಿ ದೇವತೆಗಳನ್ನು ಮಾನವರಿಗೆ ನೋಡಲು ಆಗುವದಿಲ್ಲ. ಅವರೆಲ್ಲರೂ ಧ್ಯಾನಗಮ್ಯರು. ನಾವು ಸಾಕ್ಷಾತ್ ನೋಡುವ ದೇವರೆಂದರೆ ಸೂರ್ಯನೊಬ್ಬನೇ ಸರಿ.

**ದೇವತೆಗಳು :-** ಸ್ವಾಮಿ, ತಾವು ಹೇಳಿದ್ದೆಲ್ಲವೂ ಸರಿ. ಇವನನ್ನು ಪೂಜಿಸಿ, ಆರಾಧಿಸಿ, ಉಪಾಸಿಸಿ, ಮಹತ್ ಫಲವನ್ನೇನೋ ಯಾರಾದರೂ ಪಡೆಯಬಹುದು. ಆದರೆ ಇಂತಹ ಈ ಬೆಂಕಿಯ ಮೊಟ್ಟೆಯನ್ನು ಪೂಜಿಸುವದು ಹೇಗೆ? ಇವನ ತೇಜಃ ಸ್ಪರ್ಶದಿಂದಲೇ ಮಾನವರು ಮೃತಾವಸ್ಥೆ ಹೊಂದಿ ನೆಲಕ್ಕೆ ಬಿದ್ದಿದ್ದಾರೆ. ಇವನ ಕಾಂತಿಯಿಂದ ಸಮುದ್ರಗಳೇ ಶುಷ್ಕವಾಗಿ ಹೋಗುತ್ತವೆ. ನಮ್ಮಂತಹ ದೇವತೆಗಳಿಂದ ಕೂಡ ಇವನ ಈ ದೇದೀಪ್ಯ ಮಾನವಾದ ತೇಜೋರೂಪವನ್ನು ಹಿಡಿಯಲೂ ತಡೆಯಲೂ ಆಗದು, ಉಳಿದವರ ಪಾಡೇನು? ಆದುದರಿಂದ ಈ ಸೂರ್ಯದೇವನನ್ನು ಪೂಜಿಸುವ ಉಪಾಯ ತಿಳಿಸಿರಿ? ದೇವತೆಗಳ ಈ ಮಾತನ್ನು ಕೇಳಿ ಬ್ರಹ್ಮದೇವರು ಸೂರ್ಯನ ಬಳಿಗೆ ಹೋದರು. ಸರ್ವಲೋಕ ಕಲ್ಯಾಣಕ್ಕಾಗಿ ಆ ಸೂರ್ಯಾಂತಸ್ಥನಾದ ಪರಬ್ರಹ್ಮನನ್ನು ಸ್ತೋತ್ರ ಮಾಡತೊಡಗಿದರು.

**ವ್ಯಾಸ ಉವಾಚ**

**ದೇವಾನಾಂ ವಚನಂ ಶ್ರುತ್ವಾಗತೋ ಬ್ರಹ್ಮಾ ಖಗೇಶ್ವರಂ ।**
**ಗತ್ವಾ ಸ್ತೋತುಂ ಸಮಾರೇಭೇ ಸರ್ವಲೋಕಹಿತಾಯ ವೈ ॥**

**ವ್ಯಾಸನು ಹೇಳಿದನು :-** ದೇವತೆಗಳ ಈ ಮಾತನ್ನು ಕೇಳಿ ಬ್ರಹ್ಮನು ಆ ಸೂರ್ಯನ ಬಳಿಗೆ ಹೋಗಿ ಎಲ್ಲಾ ಪ್ರಾಣಿಗಳಿಗೂ ಹಿತವನ್ನುಂಟು ಮಾಡುವ ಆಸೆಯಿಂದ ಆತನನ್ನು ಸ್ತೋತ್ರ ಮಾಡಲು ಪ್ರಾರಂಭಿಸಿದನು.

**ಬ್ರಹ್ಮೋವಾಚ**

**ದೇವ ತ್ವಂ ಸರ್ವಲೋಕಸ್ಯ ಚಕ್ಷುರ್ಭೂತೋ ನಿರಾಮಯಃ ।**
**ಬ್ರಹ್ಮರೂಪಧರಸ್ಸಾಕ್ಷಾದ್ದುಷ್ಪ್ರೇಕ್ಷ್ಯಃ ಪ್ರಳಯಾನಲಃ ॥**

ಎಲೈ ಸ್ವಾಮಿಯೆ ! ನೀನೇ ಲೋಕಕ್ಕೆಲ್ಲಾ ಕಣ್ಣಾದವನು, ರೋಗರಹಿತನು, ಬ್ರಹ್ಮ ಸ್ವರೂಪಿಯು. ಪ್ರಳಯಕಾಲದ ಅಗ್ನಿಯಂತೆ ನೋಡಲು ಅಸಾಧ್ಯನು.

**ಸರ್ವದೇವಸ್ಥಿತಸ್ತ್ವಂ ಹಿ ಸದಾ ವಾಯುಸಖಸ್ತನೌ ।**
**ಅನ್ನಾದಿ ಪಾಚನಂ ತ್ವತ್ತೋ ಜೀವನಂ ಚ ಭವೇದ್ಧ್ರುವಂ ॥**

ನೀನು ಎಲ್ಲಾ ದೇವರಲ್ಲಿಯೂ ಇದ್ದೀಯ. ದೇಹದಲ್ಲಿದ್ದುಕೊಂಡು ವಾಯುವಿನಿಂದ ಪ್ರೇರಿಸಲ್ಪಟ್ಟು ಅನ್ನಾದಿಗಳನ್ನು ಪಚನ ಮಾಡುತ್ತೀಯೆ. ನಿನ್ನಿಂದಲೇ ಜೀವನವು ಇರುವದು ಖಂಡಿತ.

ಸ್ವಾಮಿ ಸೂರ್ಯದೇವ, ನಿನ್ನ ಕಿರಣಗಳು ಉಗ್ರವಾಗಿವೆ, ಲೋಕವು ತಡೆಯಲಾರದು. ಅದು ಮೃದುವಾಗುವಂತೆ ಮಾಡು.

**ಆದಿತ್ಯ ಉವಾಚ**

**ಕಿರಣಂ ಕೋಟಿ ಕೋಟಿಂ ಮೇ ಲೋಕನಾಶಕರಂ ಪರಂ ।**
**ಪ್ರಪಂಚೋಷ್ಣಕರಂ ಲೋಕೇ ಪ್ರಯೋಗೇಣಾಚ್ಛಿದ ಪ್ರಭೋ ॥**

**ಆದಿತ್ಯ:**-ನನ್ನ ಕಿರಣಗಳು ಕೋಟಿ ಕೋಟಿಗಟ್ಟಲೆ ಇವೆ. ಲೋಕವನ್ನೇ ನಾಶಮಾಡುತ್ತವೆ, ಲೋಕಕ್ಕೆ ಹಿತಕರವಲ್ಲ. ಇವನ್ನು ಏನಾದರೂ ಮಾಡಿ ನೀನೇ ಕಡಿಮೆ ಮಾಡು.

**ವ್ಯಾಸ :**- ಆಗ ಸೂರ್ಯನ ಮಾತಿನಂತೆ ಬ್ರಹ್ಮನು ವಿಶ್ವಕರ್ಮನನ್ನು ಕರೆಸಿ ವಜ್ರದ ಚಕ್ರವನ್ನು ಮಾಡಿಸಿ ಪ್ರಳಯಾಗ್ನಿಯಂತಿದ್ದ ಆ ಸೂರ್ಯನ ಕಿರಣಗಳನ್ನು ಕತ್ತರಿಸಿದನು. ಆ ಕಾಂತಿಯಿಂದಲೇ ವಿಷ್ಣುವಿಗೆ ಸುದರ್ಶನ ಮಾಡಿಕೊಟ್ಟನು.

ಆದ್ದರಿಂದಲೇ ಯಮನಿಗೆ ಯಮದಂಡವನ್ನು, ಶಿವನಿಗೆ ಶೂಲವನ್ನು, ಕಾಲನಿಗೆ ಖಡ್ಗವನ್ನು, ಗುಹನಿಗೆ ಶಕ್ತ್ಯಾಯುಧವನ್ನು, ಚಂಡಿಕೆಗೆ ಶಸ್ತ್ರವನ್ನು, ವಿಚಿತ್ರವಾದ ಶೂಲವನ್ನು ಆ ವಿಶ್ವಕರ್ಮನು ಬ್ರಹ್ಮನ ಅಪ್ಪಣೆಯಿಂದಲೇ ಮಾಡಿಕೊಟ್ಟನು. ಸೂರ್ಯನಿಗೆ ಸಾವಿರ ಕಿರಣಗಳು ಮಾತ್ರ ಉಳಿದವು, ಅವನ್ನು ಮಾತ್ರ ಪ್ರಕಾಶಿಸುವನು. ಮಿಕ್ಕಿದ್ದೆಲ್ಲವನ್ನು ಉಜ್ಜಿ ಬಿಟ್ಟನು. ಮತ್ತೆ ಕಶ್ಯಪನಿಗೆ ಅದಿತಿಯ ಗರ್ಭದಲ್ಲಿ ಹುಟ್ಟಿ ಆದಿತ್ಯನೆಂದು ಹೆಸರನ್ನು ಹೊಂದಿದನು. ಇವನೇ ಲೋಕದಲ್ಲೆಲ್ಲ ಸುತ್ತುತ್ತಿರುವನು, ಮೇರುವಿನ ಶಿಖರವನ್ನೂ ಸುತ್ತುತ್ತಿರುವನು.

ಭೂಮಿಯಿಂದ ಲಕ್ಷ ಯೋಜನಗಳ ಮೇಲೆ, ಸೂರ್ಯ, ಗ್ರಹ, ಚಂದ್ರರು ತಿರುಗುತ್ತಿರುತ್ತಾರೆ. ಈ ಸೂರ್ಯನಿಗೆ 'ದ್ವಾದಶಾತ್ಮ' ಎಂದು ಹೆಸರು. ಮೇಷಾದಿ ಹನ್ನೆರಡು ರಾಶಿಗಳಲ್ಲಿ ಸೂರ್ಯನು ಕ್ರಮಿಸಿದಾಗ ಸಂಕ್ರಾಂತಿ ಉಂಟಾಗುತ್ತವೆ, ಧನುಸ್ಸು, ಕನ್ಯಾ ಮೀನ ರಾಶಿಗಳಲ್ಲಿ ಸೂರ್ಯಸಂಕ್ರಾಂತಿ ಆದಾಗ ಷಡಶೀತಿ ಪುಣ್ಯ ಕಾಲವೆಂದೂ, ವೃಷಭ, ವೃಶ್ಚಿಕ, ಕುಂಭಗಳ ಸಂಕ್ರಮಣಕ್ಕೆ 'ವಿಷ್ಣುಪದಿ' ಪುಣ್ಯ ಕಾಲವೆಂದೂ ಅನ್ನುತ್ತಾರೆ. ಮಕರ ಸಂಕ್ರಮಣದ ದಿನ ಮಾಡಿದ ತರ್ಪಣ, ದಾನ, ದೇವತಾರ್ಚನೆಗಳು ಅಕ್ಷಯವಾಗುತ್ತವೆ. ಮಾಘ ಶುದ್ಧ ಸಪ್ತಮಿ ಸೂರ್ಯಗ್ರಹಣಕ್ಕೆ ಸಮಾನ. ಅಂದು ಅರುಣೋದಯಕ್ಕೆ ಸ್ನಾನ ಮಾಡಿ ಈ ಮಂತ್ರ ಹೇಳಬೇಕು.

**ಯಚ್ಚ ತತ್ರ ಕೃತಂ ಪಾಪಂ ಮಯಾ ಸಪ್ತಸು ಜನ್ಮಸು ।**
**ತನ್ಮೇ ರೋಗಂ ಚ ಶೋಕಂ ಚ ಭಾಸ್ಕರೀ ಹನ್ತು ಸಪ್ತಮೀ ॥**
**ಜನನೀ ಸರ್ವಭೂತಾನಾಂ ಸಪ್ತಮೀ ಸಪ್ತಸಪ್ತಿಕೆ ।**
**ಸಪ್ತಮ್ಯಾಮುದಿತೇ ದೇವಿ ನಮಸ್ತೇ ರವಿಮಂಡಲೇ ॥**

ನಾನು ಮಾಡಿದ ಏಳು ಜನ್ಮದ ಪಾಪವನ್ನೂ, ರೋಗ, ದುಃಖಗಳನ್ನೂ ಈ ರಥ ಸಪ್ತಮಿ ನಾಶಮಾಡಲಿ. ಇದಕ್ಕೆ ಸೂರ್ಯಸಪ್ತಮಿ ಎಂದು ಹೆಸರು. ಸೂರ್ಯ ಸಪ್ತಮಿಯೆ, ನೀನು ಸೂರ್ಯಮಂಡಲದಲ್ಲಿ ಸಪ್ತಮಿ ದಿನದಂದು ಹುಟ್ಟಿರುವಿ. ನೀನು ಸರ್ವಭೂತಗಳಿಗೆ ತಾಯಿ. ನಿನಗೆ ನನ್ನ ನಮಸ್ಕಾರವಿರಲಿ ಎಂದು ಸೂರ್ಯ ಸಪ್ತಮಿಯನ್ನು ನಮಸ್ಕರಿಸಬೇಕು. ಎಕ್ಕೆಯ ಎಲೆ, ಅಕ್ಕಿ, ಹೂ, ಗಂಧ, ಇಲಚಿಯ ಹಣ್ಣು (ಬಾರಿಹಣ್ಣು) ಇವುಗಳನ್ನು ಒಂದು ತಾಮ್ರದ ಪಾತ್ರೆಯಲ್ಲಿಟ್ಟುಕೊಂಡು ಸ್ನಾನಮಾಡಿ. ಸೂರ್ಯನಿಗೆ ಅರ್ಘ್ಯ ನೀಡಿದರೆ ಏಳು ಜನ್ಮದ ಪಾಪ ನಾಶವಾಗುವದು. ಅಂದು ಬಿಸಿಲಿಗೆ

ಒಣಗಹಾಕಿದ ಶುದ್ಧವಾದ ಅಕ್ಕಿಯಿಂದ ಅನ್ನ ಮಾಡಿ ಸೂರ್ಯನಿಗೆ ನೈವೇದ್ಯ ತೋರಿಸಿ ಜ್ಞಾನಿಗಳಿಗೆ ಭೋಜನ ಮಾಡಿಸಬೇಕು. ಮಾಘ ಶುಕ್ಲ ಸಪ್ತಮಿ ಭಾನುವಾರ ಬಂದರೆ ಅದಕ್ಕೆ 'ಮಹಾಜಯ' ಅನ್ನುತ್ತಾರೆ. ಮಾಘದ ಹೊರತು ಬೇರೆ ಮಾಸಗಳಲ್ಲಿ ಸಪ್ತಮಿ ಭಾನುವಾರ ಬಂದರೆ ಅದಕ್ಕೆ 'ವಿಜಯಾ' ಅನ್ನುತ್ತಾರೆ. ಈ ಎರಡೂ ದಿನಗಳಲ್ಲಿ ಮಾಡಿದ ಪುಣ್ಯ ಕಾರ್ಯಕ್ಕೆ ಅನಂತ ಫಲ ಪ್ರಾಪ್ತಿ.

**'ಭಾಸ್ಕರಾಯ ವಿದ್ಮಹೇ ಸಹಸ್ರ ರಶ್ಮಯೇ ಧೀಮಹಿ ।**
**ತನ್ನೋ ಸೂರ್ಯಃ ಪ್ರಚೋದಯಾತ್' ॥**

ಈ ಮಂತ್ರವನ್ನು ರಥ ಸಪ್ತಮಿಯ ದಿನ ಪಠಣ ಮಾಡಬೇಕು. ಇದರಿಂದ ಮನುಷ್ಯನಿಗೆ ಜಯವು ದೊರಕುತ್ತದೆ. ಈ ರಥ ಸಪ್ತಮಿಯನ್ನು ಐದು ದಿನದ ಒಂದು ವ್ರತವನ್ನಾಗಿ ಆಚರಿಸಬೇಕು. ಇದಕ್ಕೆ 'ಭಾನು ಸಪ್ತಮಿ ವ್ರತ' ಎಂದು ಹೆಸರು. ಇದನ್ನು ಪ್ರತಿ ತಿಂಗಳು ಆಚರಿಸಬಹುದು. ಉತ್ತರಾಯಣ ಶುಕ್ಲ ಪಕ್ಷದಲ್ಲಿ ಸಪ್ತಮಿ ಭಾನುವಾರ ಬಂದಾಗ ಹಸ್ತ, ಚಿತ್ರ, ಶ್ರವಣಾ, ಮೃಗಶಿರಾ, ಪುನರ್ವಸು ಈ ಗಂಡು ನಕ್ಷತ್ರಗಳು ಇದ್ದಾಗ ಈ ವ್ರತ ಹಿಡಿಯಬೇಕು. ಪಂಚಮಿ ದಿನ ಒಂದು ಹೊತ್ತು ಊಟ, ಷಷ್ಠೀ ದಿನ ಹಾಲು, ಹಣ್ಣು-ಲಘು ಉಪಹಾರ, ಸಪ್ತಮೀ ದಿನ ಪೂರ್ಣ ಉಪವಾಸ. ಅಷ್ಟಮಿ ದಿನ ಪಾರಣೆ ಮಾಡಬೇಕು. ಗ್ರಾಮದ ಪೂರ್ವದ ಅಥವಾ ಉತ್ತರಕ್ಕಿರುವ ಎಕ್ಕದ ಮರದಲ್ಲಿಯ ತುದಿಯಲ್ಲಿರುವ ಎರಡು ಸಣ್ಣ ಚಿಗುರು ತೆಗೆದುಕೊಂಡು ನೀರಿನಲ್ಲಿ ಹಾಕಿ ಹಲ್ಲಿಗೆ ತಗಲದಂತೆ ಕುಡಿಯಬೇಕು. ಹಸು ಸೆಗಣಿ ಹಾಕುವಾಗ ಅದು ನೆಲಕ್ಕೆ ಬೀಳುವದಕ್ಕೆ ಮೊದಲು ಅಂಗುಷ್ಠ ತರ್ಜನಿ ಬೆರಳುಗಳಿಂದ ಫಲ ಮಾತ್ರ ತೆಗೆದುಕೊಂಡು ನೀರಿಗೆ ಹಾಕಿ ಹಲ್ಲಿಗೆ ತಗಲದಂತೆ ಕುಡಿಯಬೇಕು. ಹುಳುಕಾಗದ, ಒಣಗಿದ ಒಂದು ಮೆಣಸನ್ನು ನೀರಿನಲ್ಲಿ ಹಾಕಿ ದಂತಗಳಿಗೆ ಹತ್ತದಂತೆ ಪ್ರಾಶನ ಮಾಡಿ, ಖರ್ಜೂರ, ತೆಂಗಿನ ಕಾಯಿ, ಹಲ್ಲಿಗೆ ಹತ್ತದಂತೆ ಸಣ್ಣ ಹೋಳುಗಳನ್ನಾಗಿ ಮಾಡಿಕೊಂಡು ನೀರಿನಲ್ಲಿ ಹಾಕಿ ಕುಡಿಯಬೇಕು. ನವಿಲಿನ ಮೊಟ್ಟೆ ಆಕಾರದಷ್ಟು ಅನ್ನವನ್ನು ತುಪ್ಪ ಹಚ್ಚಿ ಉಣ್ಣಬೇಕು. ಷಷ್ಠಿಯ ದಿನ ಉಪಹಾರದಲ್ಲಿ ಇವಿಷ್ಟು ಆಹಾರಗಳನ್ನು ತೆಗೆದುಕೊಳ್ಳಬೇಕು. ಷಷ್ಠಿಯ ದಿನ ಉಪಹಾರ ಮಾಡಿ ಸಪ್ತಮಿ ಪೂರ್ಣ ಉಪವಾಸ ಮಾಡಿ, ಅಷ್ಟಮಿ ಪಾರಣೆ ಮಾಡಬೇಕು. ಅಷ್ಟಮಿ ದಿನವೇ ಪಾರಣೆ ಮಾಡಬೇಕು. ನವಮಿ ಸೇರಿಸಕೂಡದು. ನವಮಿ ಪಾರಣೆಯಿಂದ ವ್ರತದ ಫಲವಿಲ್ಲ. ಪಾರಣೆಯನ್ನು ಅಪರಾಹ್ನ ಮಾಡಬೇಕು. ಊಟದಲ್ಲಿ ಖಾರ, ಹುಳಿ ವರ್ಜಿಸಬೇಕು. ಅಕ್ಕಿಯನ್ನು ಸ್ವಚ್ಛ ಮಾಡಬೇಕು. ಹೆಸರು, ಉದ್ದು, ಎಳ್ಳುಗಳನ್ನು ತ್ಯಜಿಸಬೇಕು. ಸದಾಚಾರಿಗಳಾದ ವಿಪ್ರರಿಗೆ ಹಾಲು, ಅನ್ನ ಮುಂತಾದವುಗಳಿಂದ ಭೋಜನ ಮಾಡಿಸಬೇಕು. ಮದ್ಯ ಮಾಂಸ ಮುಟ್ಟಕೂಡದು. ಅವರವರ ಯೋಗ್ಯತೆಗೆ ತಕ್ಕಂತೆ ದಾನ ದಕ್ಷಿಣೆ ನೀಡಬೇಕು. ಈ ವ್ರತವನ್ನು ಪ್ರತಿ ತಿಂಗಳು ಮಾಡಿದಲ್ಲಿ ಸೂರ್ಯನು ಸಂತುಷ್ಟನಾಗುವನು. ಭಕ್ತಿಯಿಂದ ಈ ಸಪ್ತಮೀ ವ್ರತ ಮಾಡಿದರೆ ಮನುಷ್ಯನು ಸೂರ್ಯಲೋಕವನ್ನು ಸೇರುತ್ತಾನೆ.

ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ
ಭಾನುಸಪ್ತಮಿ ವ್ರತ ಎಂಬ ಎಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು

## ಸೂರ್ಯನ ಉಪಾಸನೆ

ಅಧ್ಯಾಯ - ೭೫

**ವೈಶಂಪಾಯನ :-** ಪೂಜ್ಯರೆ, ನೀವು ಕರುಣೆಯಿಂದ ನಮಗೆ ಉತ್ತಮವಾದ ಭಾನು ಸಪ್ತಮಿ ವ್ರತ ಹೇಳಿದಿರಿ. ಇನ್ನೂ ಯಾವುದಾದರೂ ಸೂರ್ಯ ವ್ರತ ಇದ್ದರೆ ತಿಳಿಸಿರಿ ?

**ವ್ಯಾಸ :-** ಕೈಲಾಸ ಶಿಖರ ಅತಿ ರಮಣೀಯ. ಅಲ್ಲಿ ಒಂದು ದಿನ ಸುಖವಾಗಿ ಕುಳಿತಿದ್ದ - ಮಹೇಶ್ವರ. ಅವನ ಮಗ ಸ್ಕಂದ ಅಲ್ಲಿಗೆ ಬಂದ. ನೆಲಕ್ಕೆ ತಲೆ ಹಚ್ಚಿ ನಮಸ್ಕರಿಸಿದ - ಆ ಸುಕುಮಾರ. ತನ್ನ ತಾತನನ್ನು ಕುರಿತು ಮಧುರವಾಗಿ ಮಾತನಾಡಿದ -

'ಸೂರ್ಯ ಸಪ್ತಮಿ ವ್ರತವನ್ನು' ಕೇಳಿದೆ. ವಾರದ ಫಲವೇನು ಎಂಬುದನ್ನೂ ತಿಳಿಯುವ ಕುತೂಹಲ ನನಗೆ. ಆದುದರಿಂದ ನನಗೆ ಸರಿಯಾಗಿ ವಿವರಿಸಿ ತಿಳಿಸಿರಿ. ವಿಶೇಷವಾಗಿ ಸೂರ್ಯನಿಗೆ ಪ್ರಿಯಕರವಾದ ಭಾನುವಾರದ ಫಲವನ್ನು, ಅಂದು ಮಾಡಬೇಕಾದ ಪೂಜಾದಿ ವಿಧಾನವನ್ನು ತಿಳಿಸಿಕೊಡಿರಿ.

**ಮಹೇಶ್ವರ :-** ವ್ರತ ಮಾಡುವವರು ಭಾನುವಾರ ಕೆಂಪು ಹೂಗಳನ್ನು ಜಲ ಪಾತ್ರೆಯಲ್ಲಿ ಹಾಕಿ ಸೂರ್ಯನಿಗೆ ಅರ್ಘ್ಯ ನೀಡಬೇಕು. ಹವಿಷ್ಯಾನ್ನವನ್ನೇ ಅಂದು ರಾತ್ರಿ ಊಟ ಮಾಡಬೇಕು. ರಥ ಸಪ್ತಮಿ ದಿನವೂ ಈ ರೀತಿಯಾಗಿ ಅರ್ಘ್ಯವನ್ನು ಕೊಟ್ಟರೆ ಸೂರ್ಯನು ಅವರಿಗೆ ಸಕಲ ಇಷ್ಟಾರ್ಥ ಪೂರೈಸುವನು. ಭಾನುವಾರ, ಸಪ್ತಮಿ, ಸಂಕ್ರಾಂತಿ ಸೇರಿದರೆ ಅದೊಂದು ದೊಡ್ಡ ಪರ್ವ. ಅಂದು ಮಾಡಿದ ವ್ರತ, ಪೂಜೆ, ಜಪ, ಧ್ಯಾನಗಳು ಅಕ್ಷಯ ಫಲಪ್ರದವಾಗುವವು.

ಭಾನುವಾರದಂದು ಸೂರ್ಯ ಪೂಜೆ ಮಾಡಬೇಕು. ಮೆಲ್ಲನೆ ಉಸಿರು ಬಿಡುತ್ತ ಸೂರ್ಯನ ಪ್ರತಿಮೆಯನ್ನು ಮಂಡಲದಲ್ಲಿ ಇಡಬೇಕು. ಕೆಂಪು ಪದ್ಮದಲ್ಲಿ ಆಸೀನನಾದ ಎರಡು ಭುಜಗಳುಳ್ಳ, ಸುಂದರ ಕಂಠದ ಕೆಂಪು ಬಟ್ಟೆ, ಆಭರಣ ಧರಿಸಿದ ಸೂರ್ಯನನ್ನು ಧ್ಯಾನ ಮಾಡಿ ಎರಡೂ ಕೈಗಳಲ್ಲಿ ಹೂ ಹಿಡಿದು, ಮೂಸಿ ನೋಡಿದ ಬಳಿಕ ಅದನ್ನು ಈಶಾನ್ಯ ದಿಕ್ಕಿಗೆ ಎಸೆಯಬೇಕು.

**ಆದಿತ್ಯಾಯ ವಿದ್ಮಹೇ ಭಾಸ್ಕರಾಯ ಧೀಮಹಿ ।**
**ತನ್ನೋ ಭಾನುಃ ಪ್ರಚೋದಯಾತ್ ॥**

ಎಂಬ ಮಂತ್ರದಿಂದ ಆವಾಹನೆ ಮಾಡಬೇಕು. ಗುರುಗಳು ಹೇಳಿದಂತೆ ಭಕ್ತಿಯಿಂದ ಹೂಗಳನ್ನು ಏರಿಸಿ, ಧೂಪಾರ್ಚನೆಗೈದು ರಸಭರಿತ ಫಲಗಳನ್ನು ನೈವೇದ್ಯಕ್ಕೆ ಅಣಿ ಮಾಡಿ ಇಟ್ಟುಕೊಳ್ಳಬೇಕು. ಹೂ, ಹಣ್ಣುಗಳಿಗೆ ನೀರಿನಿಂದ ಪ್ರೋಕ್ಷಣೆ ಮಾಡಿಬೇಕು. ಅನಂತರ ಮಂಡಲದಲ್ಲಿ ಸ್ಥಾಪಿಸಿದ ಸೂರ್ಯನ ಪ್ರತಿಮೆಗೆ ಸ್ನಾನ ಮಾಡಿಸಿ ಗಂಧಾದಿ ಲೇಪನಗೈದು, ಹೂವು ಏರಿಸಿ, ಧೂಪಾರತಿ ಮಾಡಬೇಕು. ಅನಂತರ ಪ್ರೋಕ್ಷಣೆ ಮಾಡಿಟ್ಟ ನೈವೇದ್ಯ ಅರ್ಪಿಸಿ

**ಓಂ ಸೂರ್ಯಾಯ ನಮಃ ಓಂ ಆದಿತ್ಯಾಯ ನಮಃ**
**ಓಂ ಪೂಷ್ಣೇ ನಮಃ**
**ಓಂ ಸವಿತ್ರೇ ನಮಃ**
**ಓಂ ಅರ್ಯಮ್ಣೇ ನಮಃ**